ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ

ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 28 ನೇ ಸೆಪ್ಟೆಂಬರ್, 2020

ನೌಕರರ ಕಡ್ಡಾಯ ನಿವೃತ್ತಿ ನಿಯಮಗಳು

ಶ್ರೀ ಸುನೀಲ್ ವಲ್ಯಾಪುರ್ (ವಿಧಾನ ಸಭೆಯಿಂದ ಚುನಾಯಿತರಾದವರು ):-

865 (940) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಪ್ರಾಥಮಿಕ ಶಾಲಾ ಶಿಕ್ಷಕರು ಕಡ್ಡಾಯ ನಿವೃತ್ತಿ ಪಡೆಯಲು ಎಷ್ಟು ವರ್ಷ ಸೇವೆ ಸಲ್ಲಿಸಿರಬೇಕು;

(ಆ) ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ಕಡ್ಡಾಯ ನಿವೃತ್ತಿ ನಿಯಮಗಳಿಗೂ ಹಾಗೂ ಬೇರೆ ಇಲಾಖೆಗಳ ಸರ್ಕಾರಿ ನೌಕರರ ನಿಯಮಗಳಿಗೂ ವ್ಯತ್ಯಾಸವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಇ) ಹಾಗಿದ್ದಲ್ಲಿ, ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರು ಸರ್ಕಾರಿ ನೌಕರÀರಲ್ಲವೆ ;

(ಈ) ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರು ಹತ್ತು ವರ್ಷ ಸೇವೆ ಮುಗಿಸಿ ಕಾರಣಾಂತರಗಳಿಂದ ಕಡ್ಡಾಯ ನಿವೃತ್ತಿ ಬಯಸಿದ್ದಲ್ಲಿ,

ಅನುಮತಿಸಲು ನಿಯಮಗಳಲ್ಲಿ ಅವಕಾಶವಿದೆಯೇ; ಹಾಗಿದ್ದಲ್ಲಿ, ಇಲ್ಲಿಯವರೆಗೆ ಹತ್ತು ವರ್ಷ ಸೇವೆ ಸಲ್ಲಿಸಿ ಕಡ್ಡಾಯ ನಿವೃತ್ತಿ ಪಡೆಯಲು ಅರ್ಜಿ ಸಲ್ಲಿಸಿರುವ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ಸಂಖ್ಯೆ ಎಷ್ಟು? (ತಾಲ್ಲೂಕುವಾರು ವಿವರ ನೀಡುವುದು)